ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಗುರುವಾರ,ದಿನಾಂಕ : 25ನೇ ಜುಲೈ, 2019

25. ಕರ್ನಾಟಕ ಲೋಕಸೇವಾ ಆಯೋಗದಿಂದ 1998ನೇ ಬ್ಯಾಚಿನ `ಎ' ಮತ್ತು `ಬಿ' ವೃಂದ ಹುದ್ದೆಯ ಬಗ್ಗೆ

ಶ್ರೀಅರವಿಂದಕುಮಾರ್ ಅರಳಿ(ವಿಧಾನಸಭೆಯಿಂದಚುನಾಯಿತರಾದವರು):-

607 (764) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕರ್ನಾಟಕ ಲೋಕಸೇವಾ ಆಯೋಗವು 2016ರ ಕರ್ನಾಟಕ ಉಚ್ಛನ್ಯಾಯಾಲಯದ ತೀರ್ಪನ್ನು ಆಧರಿಸಿ ಪ್ರಕಟಿಸಿರುವ 1998ನೇ ಬ್ಯಾಚಿನ, ಗ್ರೂಪ್ `ಎ' ಮತ್ತು `ಬಿ' ವೃಂದದ ಇತ್ತೀಚಿನ ಪರಿಷ್ಕೃತ ಆಯ್ಕೆ ಪಟ್ಟಿಯ ಪ್ರಕಾರ ತಹಶೀಲ್ದಾರ್ ಹುದ್ದೆಗೆ ವರದಿ ಮಾಡಿಕೊಂಡ ಅಧಿಕಾರಿಗಳ ಹೆಸರು, ವರದಿ ದಿನಾಂಕ, ಪ್ರಸ್ತುತ ನಿರ್ವಹಿಸುತ್ತಿರುವ ಸ್ಥಳ ಮತ್ತು ಈ ಹಿಂದೆ ಸಲ್ಲಿಸಿದ ಸೇವಾ ವಿವರಗಳನ್ನು ನೀಡುವುದು;

(ಆ) ಸದರಿ ಅಧಿಕಾರಿಗಳು ವಿವಿಧ ಇಲಾಖೆಗಳಲ್ಲಿ ಸಲ್ಲಿಸಿರುವ ಸೇವೆಯ ಹಿನ್ನಲೆಯಲ್ಲಿ ಹಾಗೂ ಅವರು ಪರಿವೀಕ್ಷಣಾರ್ಥಿ ಅವಧಿಯನ್ನು ಮುಕ್ತಾಯಗೊಳಿಸಿರುವ ಹಿನ್ನಲೆಯಲ್ಲಿ ಅವರುಗಳಿಗೆ ತಹಶೀಲ್ದಾರ್, ಸಹಾಯಕ ಆಯುಕ್ತರು ಹಾಗೂ ಅರ್ಹ ಹುದ್ದೆಗಳಿಗೆ ರಾಜ್ಯ ಸರ್ಕಾರ ಕೈಗೊಂಡ ಕ್ರಮಗಳೇನು;

(ಇ) ಅವರುಗಳಿಗೆ ಪೂರ್ವಾನ್ವಯವಾಗಿ ಸೇವಾ ಜೇಷ್ಠತೆ ನೀಡುವ ಕುರಿತು ಸ್ವಾಭಾವಿಕ ನ್ಯಾಯುತತ್ವಗಳು ಹಾಗೂ ಉಚ್ಛನ್ಯಾಯಾಲಯ ಮತ್ತು ಸರ್ವೋಚ್ಛನ್ಯಾಯಾಲಯದ ತೀರ್ಪುಗಳ ಹಿನ್ನಲೆಯಲ್ಲಿ ಕೈಗೊಂಡ ಕ್ರಮಗಳ\ ವಿವರಗಳೇನು ;

(ಈ) ಸೇವಾ ಮುಂಬಡ್ತಿ ನೀಡಿ ಹುದ್ದೆಗಳನ್ನು ನೀಡುವ ಬಗ್ಗೆ ಕೈಗೊಂಡ ಕ್ರಮಗಳೇನು ;

(ಉ) ಸದರಿ ಅಧಿಕಾರಿಗಳ ಸೇವಾ ಅವಧಿಯಲ್ಲಿ ಅವರಿಗೆ ಅನ್ಯಾಯವಾಗದಂತೆ ಅನ್ಯವಶ್ಯಕವಾಗಿ ತರಬೇತಿಯಲ್ಲಿ ತೊಡಗಿಸಿದಂತೆ ಸೇವಾ ಷರತ್ತುಗಳನ್ನು ಸಂರಕ್ಷಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು;

(ಊ) ಸದರಿ ಅಧಿಕಾರಿಗಳ ಸೇವಾ ಷರತ್ತುಗಳನ್ನು ತಿರುವು-ಮುರುವುಗೊಳಿಸುವ ಉದ್ದೇಶದಿಂದ ಸರ್ಕಾರ ಸುಗ್ರೀವಾಜ್ಞೆಗಳನ್ನು ರೂಪಿಸಿದ್ದರೆ ಅದರ ಪ್ರತಿ ನೀಡುವುದು? (ಘನತೆವೆತ್ತ ರಾಜ್ಯಪಾಲರ ತೀರ್ಪಿನ ಪ್ರತಿಯನ್ನು

ನೀಡುವುದು)